# ಕರ್ನಾಟಕ ವಿಧಾನಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 29 |
| ಸದಸ್ಯರ ಹೆಸರು | ಶ್ರೀ ಮೋಹನ್ ಕುಮಾರ್ ಕೊಂಡಜ್ಜಿ (ನಾಮ ನಿರ್ದೇಶನ ಹೊಂದಿದವರು) |
| ಉತ್ತರಿಸಬೇಕಾದ ದಿನಾಂಕ | 21–09–2020 |
| ಉತ್ತರಿಸಬೇಕಾದ ಸಚಿವರು | ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು |

| ಪ್ರಶ್ನೆ | ಉತ್ತರ |
|---|---|
| **ಅ)** ರಾಜ್ಯದಲ್ಲಿ 2019–20ನೇ ಶೈಕ್ಷಣಿಕ ಸಾಲಿನಲ್ಲಿ ಯಾವ ಯಾವ ತರಗತಿಗಳ ವಿದ್ಯಾರ್ಥಿಗಳಿಗೆ ಪರೀಕ್ಷೆಯನ್ನು ನಡೆಸಿ ಫಲಿತಾಂಶವನ್ನು ನೀಡಲಾಗಿರುತ್ತದೆ; ಯಾವ ಯಾವ ತರಗತಿಗಳ ವಿದ್ಯಾರ್ಥಿಗಳಿಗೆ ಪರೀಕ್ಷೆಯನ್ನು ನಡೆಸದೆಯೇ; ಫಲಿತಾಂಶವನ್ನು ನೀಡಲಾಗಿರುತ್ತದೆ; | 2019–20ನೇ ಶೈಕ್ಷಣಿಕ ಸಾಲಿನಲ್ಲಿ 10ನೇ ತರಗತಿ, 11ನೇ ತರಗತಿ ಹಾಗೂ 12ನೇ ತರಗತಿಗಳ ವಾರ್ಷಿಕ ಪರೀಕ್ಷೆಗಳನ್ನು ನಡೆಸಿ ಫಲಿತಾಂಶವನ್ನು ನೀಡಲಾಗಿದೆ. ಆಯುಕ್ತರ ಕಛೇರಿ ಸುತ್ತೋಲೆ ಸಂಖ್ಯೆ: ಸಹನಿಶಾಶಿ.ಆಶಾ/ಕ.ವ.ಕು.ಜಾ.ಸು /32544/ ಇ.ವಿ.2020, ದಿನಾಂಕ:13–3–2020 ರಲ್ಲಿ ಮತ್ತು ದಿನಾಂಕ:2–4–2020ರಲ್ಲಿ 01 ರಿಂದ 09ನೇ ತರಗತಿಯವರೆಗಿನ ವಿದ್ಯಾರ್ಥಿಗಳಿಗೆ SA–2 ಪರೀಕ್ಷೆಯನ್ನು ರದ್ದುಪಡಿಸಿದ್ದು, ವಿದ್ಯಾರ್ಥಿಗಳು ನಿರೂಪಣಾತ್ಮಕ ಮೌಲ್ಯಮಾಪನ [Formative Assesment–1], FA-2, FA-3 ಮತ್ತು ಸಂಕಲನಾತ್ಮಕ ಮೌಲ್ಯಮಾಪನ [Summative Assesment-1]ರಲ್ಲಿ ಗಳಿಸಿರುವ ಅಂಕಗಳ ಆಧಾರದ ಮೇಲೆ ಶ್ರೇಣಿಕೃತ ಫಲಿತಾಂಶವನ್ನು ಪ್ರಕಟಿಸಿ ಮುಂದಿನ ತರಗತಿಗೆ ತೇರ್ಗಡೆಗೊಳಿಸುವಂತೆ ಸೂಚಿಸಿದೆ. |
| **ಆ)** ರಾಜ್ಯದಲ್ಲಿ 2020–21ನೇ ಶೈಕ್ಷಣಿಕ ಸಾಲಿನ ಅರ್ಧ ಶೈಕ್ಷಣಿಕ ವರ್ಷವು ಮುಕ್ತಾಯವಾಗಿರುವ ಹಿನ್ನೆಲೆಯಲ್ಲಿ ಪ್ರಮುಖವಾಗಿ ಹತ್ತನೇ ತರಗತಿ ಮತ್ತು ಪಿಯುಸಿ ತರಗತಿಯ ವಿದ್ಯಾರ್ಥಿಗಳಿಗೆ ಯಾವ ಪಠ್ಯಕ್ರಮವನ್ನು ಯೋಜಿಸಲಾಗಿದೆ; | ಪ್ರಸ್ತುತ ಲಭ್ಯವಾಗುವ 120 ಶೈಕ್ಷಣಿಕ ದಿನಗಳ ಅವಧಿಗೆ ಪಠ್ಯವಸ್ತು ಮತ್ತು ಪಠ್ಯಕ್ರಮ ಹೊಂದಾಣಿಕೆ ಮಾಡಿಕೊಂಡು ಬೋಧಿಸುವ ವ್ಯವಸ್ಥೆಯನ್ನು ಮಾಡಲಾಗಿರುತ್ತದೆ. |
| **ಇ)** ಕೋವಿಡ್–19ರ ಹಿನ್ನೆಲೆಯಲ್ಲಿ ಶಾಲೆಯನ್ನು ಪ್ರಾರಂಭಿಸದ ಕಾರಣದಿಂದ ಖಾಸಗಿ ಶಾಲೆಗಳ ಬೋಧನಾ ಶುಲ್ಕದಲ್ಲಿ ರಿಯಾಯಿತಿಯನ್ನು ನೀಡಲಾಗಿದೆಯೇ; ಇಲ್ಲವಾದಲ್ಲಿ, ಈ ಬಗ್ಗೆ ಸರ್ಕಾರ | ಕೋವಿಡ್–19ರ ಹಿನ್ನೆಲೆಯಲ್ಲಿ ಆಯುಕ್ತರ ಕಛೇರಿ ಸುತ್ತೋಲೆ ದಿನಾಂಕ:05–09–2020ರಲ್ಲಿ ಖಾಸಗಿ ಅನುದಾನರಹಿತ ಶಾಲೆಗಳು ಯಾವುದೇ ಕಾರಣಕ್ಕೂ ಕಳೆದ ವರ್ಷ ಪಡೆದ ಶುಲ್ಕಕ್ಕಿಂತ ಪ್ರಸ್ತುತ ವರ್ಷದ ಶುಲ್ಕವನ್ನು |

| | |
|---|---|
| ಯಾವ ಚಿಂತನೆಯನ್ನು ಹೊಂದಿದೆ; ಖಾಸಗಿ ಶಾಲೆಗಳು ಶಾಲಾ ಪ್ರಾರಂಭಿಸದೆ ಶುಲ್ಕವನ್ನು ಪಡೆಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೆಚ್ಚಿಸದಂತೆ ಸೂಚಿಸಿದೆ. ವಿದ್ಯಾರ್ಥಿಗಳ ಪೋಷಕರಿಂದ ಪಡೆಯುವ ಶುಲ್ಕದ ಮೊತ್ತದಿಂದ ಪ್ರಥಮ ವೆಚ್ಚವನ್ನಾಗಿ ತಮ್ಮ ಸಂಸ್ಥೆಗಳಲ್ಲಿ ಕಾರ್ಯ ನಿರ್ವಹಿಸುವ ಎಲ್ಲಾ ಬೋಧಕ ಹಾಗೂ ಬೋಧಕೇತರ ಸಿಬ್ಬಂದಿ ವರ್ಗದವರ ವೇತನವನ್ನು ಪಾವತಿಸತಕ್ಕದ್ದು ಹಾಗೂ ಈ ಕುರಿತು ಯಾವುದೇ ದೂರುಗಳು ಬಾರದಂತೆ ಕ್ರಮವಹಿಸಲು ಸೂಚಿಸಿದೆ. |
| **ಈ)** ರಾಜ್ಯದಲ್ಲಿ ಕೋವಿಡ್–19ರ ನಿಯಂತ್ರಣಕ್ಕಾಗಿ ಶಾಲೆಯನ್ನು ಪ್ರಾರಂಭಿಸದ ಹಿನ್ನೆಲೆಯಲ್ಲಿ ಯಾವ ಯಾವ ತರಗತಿಯ ವಿದ್ಯಾರ್ಥಿಗಳಿಗೆ ಆನ್‌ಲೈನ್ ಶಿಕ್ಷಣಕ್ಕೆ ಅವಕಾಶವನ್ನು ನೀಡಲಾಗಿರುತ್ತದೆ; ಆನ್‌ಲೈನ್ ಶಿಕ್ಷಣ ವ್ಯವಸ್ಥೆಯನ್ನು ಹೊಂದಲಾರದ ಗ್ರಾಮೀಣ ಪ್ರದೇಶದ ಸರ್ಕಾರಿ ಶಾಲೆಯ ವಿದ್ಯಾರ್ಥಿಗಳಿಗೆ ಯಾವ ರೀತಿಯ ಪೂರಕ ಕ್ರಮವನ್ನು ಕೈಗೊಳ್ಳಲಾಗಿರುತ್ತದೆ? | ಸರ್ಕಾರದ ಆದೇಶ ಸಂಖ್ಯೆ:ಇಪಿ.139.ಪಿಜಿಸಿ.2020, ದಿನಾಂಕ:27–6–2020ರಲ್ಲಿ ಪೂರ್ವ ಪ್ರಾಥಮಿಕದಿಂದ ಪ್ರೌಢ ಶಾಲೆಯವರೆಗೆ ಅವಧಿವಾರು ಆನ್‌ಲೈನ್ ಶಿಕ್ಷಣವನ್ನು ನೀಡಲು ಅನುಮತಿಸಿದೆ.<br>ಆಯುಕ್ತರ ಕಛೇರಿ ಸುತ್ತೋಲೆ ದಿನಾಂಕ:5–9–2020ರಲ್ಲಿ ಶಾಲೆ ಹಾಗೂ ಶಿಕ್ಷಕರು ಮಕ್ಕಳೊಂದಿಗೆ ಸಂಪರ್ಕ ಸಾಧಿಸಿ ಮನೋಸ್ಥೈರ್ಯವನ್ನು ಹೆಚ್ಚಿಸುವ ಹಾಗೂ ನಿರಂತರ ಕಲಿಕೆಯನ್ನು ಮುಂದುವರೆಸುವುದಕ್ಕಾಗಿ ರಾಜ್ಯ ಸರ್ಕಾರವು "ವಿದ್ಯಾಗಮ" ಕಲಿಕಾ ಯೋಜನೆಯನ್ನು ಜಾರಿಗೆ ತಂದಿದೆ. ಶಾಲೆ ಹಾಗೂ ಶಿಕ್ಷಕರು ಮಕ್ಕಳೊಂದಿಗೆ ಸಂಪರ್ಕ ಸಾಧಿಸಿ ಅವರ ಮನೋಸ್ಥೈರ್ಯವನ್ನು ಹೆಚ್ಚಿಸುವ ಹಾಗೂ ನಿರಂತರ ಕಲಿಕೆಯನ್ನು ಮುಂದುವರೆಸುವುದಕ್ಕಾಗಿ ರಾಜ್ಯ ಸರ್ಕಾರವು 'ವಿದ್ಯಾಗಮ' ಕಲಿಕಾ ಯೋಜನೆಯನ್ನು ಹೊರ ತಂದಿರುತ್ತದೆ. ಅದೇ ರೀತಿ "ಸಂವೇದನಾ" ಕಾರ್ಯಕ್ರಮದಲ್ಲಿ ದೂರದರ್ಶನದ ಮುಖಾಂತರ ಬೋಧನೆಯನ್ನು ಮುಂದುವರೆಸಲಾಗಿರುತ್ತದೆ.<br>ಖಾಸಗಿ ಅನುದಾನರಹಿತ ಶಾಲೆಗಳು ಸಹಾ ತಮ್ಮ ಶಾಲೆಯಲ್ಲಿ ದಾಖಲಾಗುವ ಮಕ್ಕಳ ನಿರಂತರ ಕಲಿಕೆಯನ್ನು ಮುಂದುವರೆಸಲು ಸರ್ಕಾರದ ಈ ಯೋಜನೆಗಳನ್ನು ಅನುಷ್ಠಾನಗೊಳಿಸಲು ಅಥವಾ ತಮ್ಮದೇ ಆದ ಪರ್ಯಾಯ ಕಾರ್ಯಕ್ರಮವನ್ನು ರೂಪಿಸಿಕೊಳ್ಳಲು ಸೂಚಿಸಿದೆ. |

**ಇಡಿ 112 ಪಿಜಿಸಿ 2020**

**[ ಎಸ್.ಸುರೇಶ್ ಕುಮಾರ್]**
**ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ**
**ಸಕಾಲ ಸಚಿವರು.**